## ಎಚ್ ಕೆ ಶರತ್

ಮೂಲತಃ ಹಾಸನದವನು. ಓದಿದ್ದು ಹಾಸನದ ಮಲೆನಾಡು ಎಂಜಿನಿಯರಿಂಗ್ ಕಾಲೇಜಿನಲ್ಲಿ ಬಿ.ಇ. ಹಾಗು ಎಂ.ಟೆಕ್. ಈಗ ಅದೇ ಕಾಲೇಜಿನಲ್ಲಿ ಸಹಾಯಕ ಪ್ರಾಧ್ಯಾಪಕನಾಗಿ ಕಾರ್ಯನಿರ್ವಹಣೆ. 'ಮೊದಲ ತೊದಲು', 'ಬೆಳಕಿನ ಬೇಲಿ', 'ಗೋಡೆಗಳ ನಡುವೆ...' ಮತ್ತು 'ಕುಶಲೋಪರಿ' ಪ್ರಕಟಿತ ಕೃತಿಗಳು.

✉: hksharu@gmail.com

# Ityaadi Enilla… Preetiyashte!

*Collection of short poems written by*
H K Sharath

ಪ್ರಕಟಣೆ: 2020

ಪುಟಗಳು: 120

ಬೆಲೆ: ₹ 0



ಮುಖಪುಟ ಚಿತ್ರ: ಪಿಕ್ಸ್ ಅಬೇ

ವಿನ್ಯಾಸ: ಎಚ್ ಕೆ ಶರತ್

**ಪ್ರಕಾಶಕರು**

ಪ್ರಜೋದಯ ಪ್ರಕಾಶನ, ಹಾಸನ

✉: prajodayaprakashana@gmail.com

**ಆನ್ ಲೈನ್ ಅಂಗಡಿ**

www.instamojo.com/prajodaya

/prajodayaprakashana /prajodaya /prajodaya

## ಅರ್ಪಣೆ

ಪ್ರೀತಿಸುವ ಹುಡುಗಿಗೆ...

## ಏನಿದು...

'ಇ-ಪುಸ್ತಕ'ವಾಗಿ ನನ್ನ ಬರಹಗಳನ್ನು ಒಂದೆಡೆ ಪೇರಿಸಿಡುವ ನಿಟ್ಟಿನಲ್ಲಿ ಇದು ಮೂರನೇ ಪ್ರಯತ್ನ. ಈ ಮೊದಲು 2016 ಮತ್ತು 2017ರಲ್ಲಿ ಎರಡು ಇ-ಪುಸ್ತಕಗಳನ್ನು ಹೊರತಂದಿದ್ದೆ. ಕಾರಣಾಂತರಗಳಿಂದ ಆನಂತರ ಮತ್ತಷ್ಟು ಪ್ರಯತ್ನಗಳಿಗೆ ಕೈ ಹಾಕಲು ಸಾಧ್ಯವಾಗಿರಲಿಲ್ಲ.
'ಇತ್ಯಾದಿ ಏನಿಲ್ಲ... ಪ್ರೀತಿಯಷ್ಟೆ!' 2008 ರಿಂದ 2014ರ ನಡುವೆ ಬರೆದಿದ್ದ ಪ್ರೇಮದ ಕುರಿತಾದ ಮೂರ್ನಾಲ್ಕು ಸಾಲುಗಳ ಗುಚ್ಛ. ಇಲ್ಲಿರುವ ಬಹುತೇಕ ಕವಿತೆಯಾಗದ ಸಾಲುಗಳನ್ನು ನನ್ನ ವಿದ್ಯಾರ್ಥಿ ಜೀವನದ ವೇಳೆಯಲ್ಲಿ ಬರೆದಿರುವೆ. ಇವುಗಳನ್ನೆಲ್ಲ ಮತ್ತೊಮ್ಮೆ ಓದಿದ ನನಗೇ ಪುಸ್ತಕವಾಗಿ

ಹೊರತರುವ ಅಗತ್ಯವಿದೆಯೇ ಎನಿಸಿದ್ದೂ ಹೌದು. ಮುದ್ರಿತ ಪುಸ್ತಕವಲ್ಲದ ಕಾರಣ ಇವುಗಳನ್ನು ಓದುವ ಅಗತ್ಯವಿಲ್ಲ ಎನಿಸಿದವರು ನನಗೆ ಹೆಚ್ಚು ಬೈಯ್ಯದೆ ಅಲ್ಲಿಗೆ ಓದು ನಿಲ್ಲಿಸಬಹುದು ಎನಿಸಿ ಇ-ಪುಸ್ತಕವಾಗಿ ಹೊರತರುವ ಧೈರ್ಯ ಮಾಡಿದ್ದೀನಿ. 2014ರ ನಂತರ ಇಂತಹದ್ದನ್ನೆಲ್ಲ ಬರೆಯುವುದನ್ನು ನಿಲ್ಲಿಸಿದ್ದೇನೆ! ಈಗಾಗಲೇ ಬರೆದಿರುವುದೇ ಇನ್ನಷ್ಟು ಇರುವ ಕಾರಣ, ಈ ಪುಸ್ತಕವನ್ನು ಅಪ್ಪಿತಪ್ಪಿ ಕಡೆಯವರೆಗೂ ಓದುವ ಧೈರ್ಯ ಮಾಡುವವರು ಇನ್ನೂ ಒಂದೆರಡು ಇಂಥ ಇ-ಪುಸ್ತಕಗಳನ್ನು ನಿರೀಕ್ಷಿಸಬಹುದು!!

- ಎಚ್ ಕೆ ಶರತ್

**1.**

‘ನೀನು ದೇವತೆ…’

ಹಾಗೆಂದು

ಹೊರೆ ಹೊರಿಸದು

ನನ್ನ ಕವಿತೆ

**2.**

ಚಳಿಯ ಸೆರಗು

ಸರಿಸಿದ ಸೂರ್ಯ…

ಮುಂಜಾನೆ ಮಧುಚಂದ್ರ!

**3.**

ಮನಸ್ಸಿನ ಕುಮ್ಮಕ್ಕು

ಪ್ರೀತಿಸಲು

ನೀಡುವುದು ಹಕ್ಕು

**4.**

ಮೌನದ ಕಣಿವೆಯಲ್ಲಿ

ಕಳೆದು ಹೋದ ಮಾತುಗಳು

ನನ್ನ ಅವಳ

ನಡುವಿನ ಸಂಬಂಧಕ್ಕೆ

ಸಾಕ್ಷಿಗಳು

5.

ಕಣ್ಣಲ್ಲಿ ನೀರು ತುಂಬಿದೆ

ನೀ ಸಿಕ್ಕ ಖುಷಿಗೆ

ಎದೆಯನ್ನು ನೋವು ತೊರೆದಿದೆ

ನೀ ನಕ್ಕ ಪರಿಗೆ

6.

ಅವಳು ಇದ್ದಕ್ಕಿದ್ದಂತೆ

ನಾಪತ್ತೆಯಾಗಿದ್ದಾಳೆ,

ನನ್ನ ಏಕಾಂತವನ್ನು

ಒಂಟಿ ಮಾಡಿ.

**7.**

ಒಡಲೊಳಗಿನ ಉನ್ಮಾದ

ನಿನ್ನೊಲವು

ದಯಪಾಲಿಸಿದ ಪ್ರಸಾದ

**8.**

ಅರಿಯದೆ ಒಂದಾದ

ಮೌನ ಕಣಿವೆಗಳ

ನಡುವಲ್ಲಿ

ಚೌಕಟ್ಟು ತೆಳುವಾಗುತ್ತಿದೆ

## 9.

ಒಳಗೆ ಹುಟ್ಟಿ

ಒಡಲೊಳಗೆ ಸಾಯುವ

ಸಂಭ್ರಮಗಳ ಎದುರು

ಅವಳು ನಿಂತಿದ್ದಾಳೆ

## 10.

ಅಲೆ

ಬೋಧಿಸುತ್ತಿದೆ...

ದಂಡೆ

ಆಲಿಸುತ್ತಿದೆ...

## 11.

ಎದೆ ತುಂಬ

ದಿಗಿಲು ತುಂಬಿಕೊಂಡ ರಾತ್ರಿ

ಬೆಳದಿಂಗಳೆದುರು ಬೆತ್ತಲಾಗಿ

ಹಗುರಾಗಿದೆ

## 12.

ಕನಸಿನಂಗಡಿ ತುಂಬ

ಚಿತ್ತಾರದ ಕನಸುಗಳು...

ಅವಳದು ಖಾಲಿ ಜೇಬು

## 13.

ಸಾಯಬೇಕೆಂದುಕೊಳ್ಳೋಣವೆಂದರೆ

ನೆಪಗಳೆ ಸಿಗುತ್ತಿಲ್ಲ;

ಅವಳು ಜಿಗುಪ್ಸೆಯ ಕೊರಳಿಗೆ

ಕುಣಿಕೆ ಬಿಗಿದಿದ್ದಾಳೆ.

## 14.

ಅಪರಿಚಿತ ಹಾದಿಯ

ನಡುವಲ್ಲಿ ಸಿಕ್ಕ

ಬದುಕು

ಅವಳು ನನಗಷ್ಟೇ ಪರಿಚಿತ

## 15.

ಅವನ ಸಿಗರೇಟು ಸುಡುವ

ಚಟ ಬಿಡಿಸಲು

ಉಪವಾಸ ಕೂತ

ಇವಳ ಕನಸಿನಂಗಡಿ ತುಂಬ

ಖಾಲಿ ಪ್ಯಾಕುಗಳು,

ಬಿಕರಿಯಾಗದ ಕನಸುಗಳ ಬಿಂಬಗಳು.

## 16.

ಕನಸಿನ ಹುಡುಗಿ

ಬೆಳ್ಳಂಬೆಳಗ್ಗೆ ಕಣ್ಬಿಟ್ಟಳು...

ನನ್ನೊಡಲಲ್ಲಿ ಸೂರ್ಯೋದಯ

## 17.

ನಿನ್ನ ದುಗುಡದ ಒಡಲಿಗೆ

ನಲಿವು ಸುರಿಯುವ ಕಾಲ

ಇಲ್ಲೇ ಎಲ್ಲೋ

ಕಾಲು ಚಾಚಿಕೊಂಡು

ಮಲಗಿದೆ

## 18.

ಅವಳ ಕೆನ್ನೆಗೆ

ನಗು ಬಳಿದು ಹೋದ

ಅವನ ಮುಗ್ಧತೆ

ಇದೀಗ

ಬದುಕಿನ ಸಂತೆಯಲ್ಲಿ

ಬೆಲೆ ಕಳೆದುಕೊಂಡಿದೆ.

## 19.

ನಿನ್ನ

ಗೈರು ಹಾಜರಿ

ಮನದ ಗುಜರಿಯಲ್ಲಿ

ಗೆದ್ದಲು ತಿನ್ನುತ್ತ ಬಿದ್ದಿದ್ದ

ನೆನಪಿನ ಬುತ್ತಿ

ಹೆಕ್ಕಿ ತಂದಿದೆ

## 20.

ಅದು ಪ್ರೀತಿಯಲ್ಲ

ಸಲುಗೆಯೂ ಅಲ್ಲ

ಆದರೂ ಅವಳು

ಅವನನ್ನು ಆರಾಧಿಸುತ್ತಾಳೆ;

ಹೆಸರಿಡದ ಸಂಬಂಧದ

ಹುಡುಕಾಟದಲ್ಲಿ...

## 21.

ಗುಲಾಬಿ ಮುಡಿದಿದ್ದಾಳೆ

ನನ್ನ ಗೆಳತಿ

ನೆನಪಿನ ಮುಳ್ಳು ಕಿತ್ತು

ವಾಸ್ತವದ

ಹೊರೆಯ ಹೊತ್ತು

## 22.

ಒಲವಿನ ಕಡಲೆಂದು ಭಾವಿಸಿ

ಸಾಕಷ್ಟು ಸುಖಿಸಿ

ಅವಳು ನಿದ್ರಿಸುತ್ತಿದ್ದಾಳೆ

ಅವನ ಮಡಿಲಲ್ಲಿ

## 23.

ಅವಳು ಸಂಜೆಯಷ್ಟೇ ಸುಂದರ

ಬೆಡಗು ಅಡಗಿದೆ

ಬೆರಗು ಕರಗಿದೆ

ಅಮೂರ್ತದ ಹಂದರ

**24.**

ಅವಳ ಮುನಿಸಿನೆದುರು

ಜಗದ ಬಣ್ಣದ ದಿರಿಸು

ಕಳಾಹೀನವಾಗಿದೆ

**25.**

ಸಂಕಟದ ಸುಳಿಗೆ

ಸುಡುಗಾಡು ತೋರಿದ

ನಿನ್ನ ಒಲವಿಗೆ

ನಾನು ಚಿರಋಣಿ

## 26.

ಅವಳ ಕಣ್ಣಿನಲ್ಲಿ

ನನ್ನ ಕನಸು ಮಿನುಗಿತು

ನಲಿವು ನನ್ನೊಂದಿಗೆ

ಕೂಡಿ ಆಡಿತು

## 27.

ಇರುಳ ಹೊಲದ ಮೇಲೆ

ಬೆಳಕಿನ ಬಿತ್ತನೆ ನಡೆಯುತ್ತಿದೆ...

ಅವಳು ದೀಪ ಹಿಡಿದು

ಬದುವಿನಲ್ಲಿ ನಿಂತಿದ್ದಾಳೆ

## 28.

ಕತ್ತಲೆಯೊಳಗೆ ಕಳಚಿ ಬಿದ್ದವನಿಗೆ

ಮಿನುಗುವ ಚುಕ್ಕಿ

ಅವಳ ನೆನಪು

## 29.

ಎಲ್ಲೋ ಕಳಕೊಂಡ ಖಾಲಿ ಪುಟವ

ನಿನ್ನ ಕಣ್ಣಲ್ಲೇ ಹುಡುಕುವ ಹಟವ

ಕೊಂದುಬಿಡಬೇಕೆಂದಿದ್ದೇನೆ ಗೆಳತಿ,

ಎಲ್ಲರಂತೆ ಬದುಕುವ ಚಟವ

ನನ್ನದಾಗಿಸಿಕೊಳ್ಳುವ ಸಲುವಾಗಿ!

**30.**

ನಿನ್ನ ತುಂಟಾಟಕ್ಕಿಂತ

ಹಿತವಾದ ತಂಗಾಳಿ

ಹೊಂಗೆ ಮರದ ಮಡಿಲಲ್ಲೂ

ಸೋಕಲಿಲ್ಲ

**31.**

ನಿನ್ನ

ಅಪ್ಪುಗೆಯ ಬಿಸಿ

ನನ್ನೊಡಲ ಕನಸಿಗೆ

ಕಾವು ಕೊಡುತ್ತಿದೆ

**32.**

ಮಳೆಗೆ

ಮನಸು ಒಡ್ಡಿದ್ದೇನೆ

ನಿನ್ನ ನೆನಪುಗಳು

ಹಸಿ ಹಸಿಯಾಗಿರಲಿ ಎಂದು

**33.**

ನಿನ್ನ ಒಲವಿನ ಏಣಿ ಏರಿ

ನಾ ನಲಿವಿನ ಲೋಕಕ್ಕೆ

ರಾಯಭಾರಿಯಾದೆ

## 34.

ನೀ ಬಂದು

ನನ್ನೊಳಗೆ ಕುಳಿತ ಮೇಲೆ

ಕಣ್ಣೀರು ಸಿಹಿಯಾಗಿದೆ

ನೋವು ತಣ್ಣಗಿದೆ

## 35.

ನೊಂದುಕೊಳ್ಳುವ

ನೆಪಕ್ಕಾದರೂ

ನೆನಪಾಗುವ ನೀನು

ಅಮೂರ್ತ ಕನ್ನಡಿ ಮೇಲೆ

ಮೂಡಿದ

ಮೂರ್ತ ಭಾವಚಿತ್ರ

## 36.

ನನ್ನೊಡಲ ಹಲ್ಕಾತನಗಳು

ಅವಳ ಮಡಿಲ ನೆರಳಲ್ಲಿ

ಮಲಗಿ

ಚಿರನಿದ್ರೆಗೆ ಜಾರುತ್ತಿವೆ

## 37.

ಅವಳ ತುಟಿ ತಲುಪಿದ

ಕಂಬನಿ

ಸಂಭ್ರಮದ ಎದೆಗೆ

ಜಾಡಿಸಿ ಒದೆಯಿತು.

ವಾಸ್ತವ

ಕದ ತೆರೆಯಿತು.

## 38.

ಪೆದ್ದು ಮೋಹ

ಕದ್ದು ನೋಡುವ ದಾಹ

ಪ್ರಾಯದ ಸಂತೆಯಲ್ಲಿ

ತಾಪತ್ರಯಗಳ ಮೆರವಣಿಗೆ

## 39.

ರಾತ್ರಿ

ನನ್ನೆದೆ ಮೇಲೆ ಕೂತಿದ್ದ

ಕನಸು

ಮುಂಜಾನೆ

ಮೇಲೇಳುವಷ್ಟರಲ್ಲಿ

ಭ್ರಮೆಯ ಬೊಗಸೆ ಸೇರಿತ್ತು

## 40.

ಮೈ ಮೇಲಿನ

ಮುಳ್ಳಿನ ಹಂಗು ತೊರೆದ

ಗುಲಾಬಿ

ಪಲ್ಲಕ್ಕಿ ಮೇಲೆ

ಪದರುಗುಡುತ್ತಿದೆ

## 41.

ಕಣಿವೆಯೊಳಗೆ

ಜಾರಿತು ಕಣ್ಣು...

ಸಮತಟ್ಟಾದ ನೆಲ

ಫಲವತ್ತಾದ ಮಣ್ಣು

ಮೋಹಕ ಮೌನ

ಕಳ್ಳ ಧ್ಯಾನ

ಆ ಬದಿಯಲ್ಲಿ ಅವಳು

## 42.

ಅವಳು

ಬಾಡದ

ಮತ್ತೆಂದಿಗೂ

ಮೊಗ್ಗಾಗದ

ಮೋಹಕ ಹೂವು

## 43.

ಒಮ್ಮೆ ಮನಸು ಕೊಡು ಗೆಳತಿ

ನಿನಗೊಂದಿಷ್ಟು ನೋವು

ಪರಭಾರೆ ಮಾಡಿ

ತುಸು ನಿಟ್ಟುಸಿರು ಬಿಡುತ್ತೇನೆ

**44.**

ಅವಳ ಒಡಲಿಗೆ

ಬೊಗಸೆಯಷ್ಟು ಭರವಸೆ ಸುರಿದ

ಅವನ ಕಣ್ಣುಗಳಲ್ಲಿ

ತಾನೂ ಮನುಷ್ಯನಾದ ಸಂಭ್ರಮ.

**45.**

ಅವಳ ಎದೆಯ ಮೇಲೆ

ನಾ ಮುಡಿಸಿದ ಹೂವು

ಬಾಡುತ್ತಿದೆ...

ನಾನು ಮೂಕ ಪ್ರೇಕ್ಷಕ

**46.**

ಹರಿವ ಹಾದಿಯೇ ನೆಲೆ

ಎಂದುಕೊಂಡ ನದಿಗೆ

ಕಡಲ ಕಾಗುಣಿತ

ಅರ್ಥವಾಗುತ್ತಿಲ್ಲ

**47.**

ಒಂದು ಪುಟ್ಟ ಕನಸು...

ನಿನ್ನೆದುರು ನಾನಾಗಬೇಕು

ಈಗಷ್ಟೇ ಕಣ್ಬಿಟ್ಟ ಹಸುಗೂಸು

## 48.

ಕನಸುಗಳ ಕಳಕೊಂಡು

ನಿನ್ನೆದುರು ಬಂದು ನಿಂತಿದ್ದೇನೆ.

ಮುನಿಸು ಬಿಡು,

ಕನಸು ನೆಡುವ

ಮನಸು ಕೊಡು.

## 49.

ನಿನ್ನ ನೆರಳು ಅರಸುವ

ನಾನು

ದಡ್ಡನೇ ಇರಬೇಕು.

ಇಲ್ಲವಾದರೆ

ನೀ ನನ್ನೊಡನೆ

ತಪ್ಪದೇ ಬರಬೇಕು.

## 50.

ದೊಡ್ಡವನಾದೆ

ದಡ್ಡನೂ ಆದೆ

ಮಾತು ತಪ್ಪುವ

ನಿನ್ನ ದೊಡ್ಡತನದೆದುರು

## 51.

ಮೀಟಬೇಕಿತ್ತು ಒಮ್ಮೆ

ಅವಳ ಒಡಲ ನೋವು

ಚಿಮ್ಮುವಂತೆ

ನನ್ನೊಡಲ ಘಾಟು ತಾಳಲಾರದೆ

ಕೆಮ್ಮುವಂತೆ

## 52.

ಅವಳ ಕಂಬನಿ ಹರಿಯುತ್ತಿದೆ

ಅವನ ಮನದ ಮೇಲೆ

## 53.

ಪ್ರೀತಿಯ ಪರಿಧಿ

ಹುಡುಕಲು ಹೊರಟವನಿಗೆ

ಸಿಕ್ಕಿದ್ದು

ವಿಸ್ಮಯದ ಸನ್ನಿಧಿ

## 54.

ನಗು ಹುದುಗಿದೆ

ಮಾತು ಮಲಗಿದೆ

ತೀರದ

ಅವಳ ಗುಂಗು

ಮನದ ತುಂಬೆಲ್ಲ

ತುಂಬಿದೆ ರಂಗು

**55.**

ಅವಳು

ನನಗೆ ಅರ್ಥವಾಗದ

ಪ್ರಪಂಚದ ರಾಯಭಾರಿ

**56.**

ಯಾರೋ

ದಿಟ್ಟಿಸುತ್ತಿದ್ದಾರೆಂಬ ಭ್ರಮೆ

ನನ್ನೊಳಗಿನ ತಳಮಳದ ಅಧ್ಯಾಯಕ್ಕೆ

ಮುನ್ನುಡಿ ಬರೆದಿದೆ

## 57.

ಮುಂಜಾನೆ ಕವಿದ

ದಟ್ಟ ಮಂಜು

ಕಣ್ಣೆದುರಿಗಿದ್ದ

ಅವಳನ್ನೂ

ತನ್ನೊಡಲಲ್ಲಿ ಅಡಗಿಸಿಕೊಂಡಿತ್ತು

**58.**

ಒಲವು ತೆರವಾದ

ಮನದ ಮನೆಯ ಪಾಡು

ಲಯ ತಪ್ಪಿದ

ಹಕ್ಕಿಯ ಹಾಡು

**59.**

ನಿನ್ನ ನಗೆಯಲ್ಲೊಂದು

ಜೀವಂತ ನೋವಿನ

ಚಹರೆ ಇರಬಹುದೇ?

## 60.

ನಿನ್ನ ನೆವದಲ್ಲೊಂದು

ನೋವ ಸುಡುವ ಕಿಚ್ಚಿದೆ.

ಅದು

ನಲಿವ ಹಣತೆ ಹಚ್ಚಿದೆ.

## 61.

ಅವಳು ಅಡ್ಡ ಮಳೆಯಂತೆ

ಸುರಿದು

ಸಂಶಯದ ರಾಡಿ ಸೆಳೆದುಕೊಂಡು

ಸರಿದಳು

**62.**

ಖಾಸಗಿಯಾಗಿ ನೀನು

ಜೊತೆಯಲಿ ಕುಂತಾಗ

ಕಸಿಯಾದ ಕನಸು

ಮನದ ಹೊಲಸು ಹೊರ ಹಾಕುತಿದೆ

**63.**

ನಿನ್ನ ನಲುಮೆಯ ನಳಿಕೆಯಿಂದ

ತೂರಿ ಬಂದ ಕಾಡತೂಸು

ಮನದಾಳವ ಹೊಕ್ಕಿದೆ

ನಿಟ್ಟುಸಿರು ತುಸು ದಕ್ಕಿದೆ

## 64.

ಆತ್ಮಕ್ಕೊಂದು

ಅಪ್ಪುಗೆ ದಕ್ಕಿದೆ

ಮನಸ್ಸು ಜಾರಿದ

ತಪ್ಪಲ್ಲದ ತಪ್ಪಿಗೆ

## 65.

ಅವಳ ಮೌನ

ನನ್ನ ಧ್ಯಾನ

ಪ್ರೀತಿಯಲ್ಲಿ ಮುಳುಗಿವೆ

## 66.

ಪ್ರೀತಿಯ ಗಂಟಿನೊಳಗೆ

ಅವಳ ನಂಟಿದೆ.

ತನ್ನನ್ನು ಸವರುವ

ಪ್ರತಿ ಸಂಬಂಧಕ್ಕೂ

ಅದರ ಹೊರೆ ಹೊರಿಸುತ್ತಾಳೆ.

## 67.

ರಾತ್ರಿ ಸುರಿದ ಮಳೆಗೆ

ಮೈಯೊಡ್ಡಿ ನಿರಾಳವಾದ ಇಳೆ

ಮುಂಜಾನೆ ಧರಿಸಿಕೊಂಡ

ಹೊಸ ಕಳೆ

ಅವಳ ಕಣ್ಣಲ್ಲಿತ್ತು

## 68.

ಅವಳು

ಅಮಾವಾಸ್ಯೆಯಂದು

ಹಾಜರಾಗುವ ಬೆಳದಿಂಗಳು

## 69.

ಬಾಡಿದ ಮಲ್ಲಿಗೆ

ಮುಡಿದವಳ ಮುಗುಳ್ನಗೆ

ಪರಿಮಳ ಪಸರಿಸಿತು

## 70.

ಅವನ ಎದೆಯಲ್ಲಿ

ಅವಳು ಬೆಳಕಾದರೆ

ನನ್ನೊಳಗೆ

ಕತ್ತಲಾವರಿಸುವ ಭೀತಿ

**71.**

ನಿದ್ರಿಸುತ್ತಿರುವ ಮಗು

ಅವಳ ನಗು

**72.**

ಬೆವರು ಬಸಿಯುವ ಸೆಕೆ

ವಾಸ್ತವದ ನಂಟು ಕಳಚುವ ಆಕೆ

ಇಬ್ಬರೂ

ನನ್ನೊಳಗಿನ ರಾಡಿ ತೊಳೆಯುತ್ತಿದ್ದಾರೆ

## 73.

ಮುನಿಸು

ಮಾತು ಸರಿಸಿತ್ತು

ಒಲವು

ಮಾರುವೇಷ ಧರಿಸಿತ್ತು

**74.**

ಮನದ ಪುಟದಲಿ

ಅವಳ ಗೈರು ಹಾಜರಿ

ದಾಖಲಾದರೆ

ಏನೋ ದಿಗಿಲು

ಬೇಸರವಂತೂ ಮಾಮೂಲು

**75.**

ಅವಳೆಂದರೆ ಬಹುಮುಖ

ಹುಚ್ಚು ಹುಮ್ಮಸ್ಸಿನ ಪ್ರತೀಕ

## 76.

ನನ್ನೆಡೆಗೊಮ್ಮೆ

ನೋಡು ತುಸು.

ನಿನ್ನಷ್ಟೇ

ನನಗೂ ಉಂಟು

ಮುನಿಸು.

## 77.

ಹಕ್ಕಿ ಹಾರಿ ಹೋಯ್ತು

ಖಾಲಿ ಗೂಡು

ನೆನಪಿಗೆ ಬಿಟ್ಟು

## 78.

ಕದ್ದು ನೋಡುವ

ಕ್ರಿಯೆಗೊಂದು

ಹಂಗುಂಟು...

ನಿನ್ನದೇ ಧ್ಯಾನದಲ್ಲಿ

ಮುಳುಗೇಳುವ ಬೆರಗುಂಟು.

## 79.

ದಾಖಲಿಸಬೇಕಿತ್ತು ನಿನ್ನೊಳಗೆ

ನನ್ನ ಕನಸುಗಳನು;

ತೊರೆದೋಗುವ ಮುನ್ನ

ನೀ ನನ್ನನು,

ಇದ್ದಾಗ ಸಲಹದ ಜಗವನು.

**80.**

ಎಲ್ಲ ತೀರಗಳಿಗೂ

ಅಪರಿಚಿತವಾಗಿಯೇ ಹಾಯುತ್ತಿದೆ

ನನ್ನ ನೋಟ

ಅವಳಿರುವ ದಂಡೆಯೆಡೆಗೆ

**81.**

ತುಕ್ಕು ಹಿಡಿದ

ಮನದ ಮೈ ಮೇಲೆ

ಬಣ್ಣ ಬಳಿಯಲು ಬಂದವಳು

ನೀರು ಚಿಮುಕಿಸಿ ದೂರ ಸರಿದಳು

## 82.

ಮಲಗಿದ್ದ ಮನಸು

ಮೇಲೆದ್ದಿದೆ

ಅವಳ ಮುಗುಳುನಗೆಯ

ಉದಯ

ಕಣ್ತುಂಬಿಕೊಂಡಿದೆ

## 83.

ನನ್ನ ಖಾಸಾ ಕೋಣೆಯೊಳಗೆ

ಇಣುಕುವ ಧಾವಂತದಲ್ಲಿ

ಅವಳು

ತನ್ನ ಕಣ್‌ರೆಪ್ಪೆ ತೆರೆಯುವುದನ್ನೇ

ಮರೆತುಬಿಟ್ಟಳು

## 84.

ಅವಳ ನೆನಪಿನ

ಮಾಳಿಗೆ ಮೇಲೆ

ತಿರುಗುವ ಗಳಿಗೆ

ತಣಿಯುವುದು

ಒಡಲಾಳದ ಬೇಗೆ

## 85.

ಮುನಿಸು

ಅವಳ ಪ್ರೀತಿ

ಆಗಾಗ ಧರಿಸುವ

ಸೊಗಸಾದ ದಿರಿಸು

## 86.

ಮಾನವತೆಯ ಹೊರತು

ಎಲ್ಲವನೂ ಹೂತು

ಜಗದ ಮಾತು

ಮರೆತು ಬಿಡೋಣ

ಜೊತೆಯಲಿ ಕೂತು

## 87.

ಮಿತಿಯ ಮಾತು

ಮಡಿಯುವಂತೆ ಮಾಡಿದ ನೀನು

ಮಿತಿಮೀರಿ

ಮಾತಾಡಲು ಬಂದಾಗ

ಅತಿಯಾದ ಮೌನ ತಾಳಿದ್ದು

ಸರಿಯೇ?

**88.**

‘ಅರ್ಥ ಮಾಡಿಕೊಂಡೆ’

ಎಂಬ ಮಾತಿನ ಆಯಸ್ಸು

ಅತ್ಯಲ್ಪವೆಂದು

ಅರ್ಥ ಮಾಡಿಕೊಂಡೆ

**89.**

ಅವಳ ಲವಲವಿಕೆ

ನೋವು ನಿವಾರಕ

ಲಸಿಕೆ

## 90.

ಮನಸ್ಸು ಮರುಭೂಮಿ

ಅವಳು

ಮರುಭೂಮಿಯ ಪ್ರೇಮಿ

## 91.

ಅವನ ಕತೆ

ಹುಚ್ಚು ವಾಸ್ತವತೆ.

ಅವಳ ವ್ಯಥೆ

ಬರೀ ಭಾವುಕತೆ.

ಅವರಿಬ್ಬರೂ

ಒಬ್ಬರೊಳಗೊಬ್ಬರು

ಇಳಿಯುವುದು

ಬದುಕಿನ ರೋಚಕತೆ,

ಪ್ರೀತಿಯ ಪ್ರಾತ್ಯಕ್ಷಿಕೆ.

**92.**

ಅವಳು

ತನ್ನ ಹುಸಿ ಮುನಿಸಿಗೆ

ಆಗಾಗ

ಪ್ರೀತಿಯ ಬಣ್ಣ ಬಳಿಯುತ್ತಾಳೆ

ಅವನ ಒಳಗಣ್ಣಿಗದು

ಕಾಣಬಹುದೆಂದು

## 93.

ಮಾತಾಡದೇ ಮಾತಾಡಿಸೋ

ಅವಳ ಕಣ್ಣ ಭಾಷೆ

ನನ್ನ ಮನಸ್ಸಿನ ಸಮೀಕ್ಷೆ ನಡೆಸಿತು

## 94.

ಅವಳ

ಪುಟ್ಟ ಕೀಟಲೆ

ದಹಿಸುವುದು

ನನ್ನ ಅಹಂ

ಟನ್ನುಗಟ್ಟಲೆ

**95.**

ಅವಳ ನೆನಪು

ಕತ್ತಲಲ್ಲಿ

ಬೆಳಕು ಹಂಚುವ

ಮಿಂಚು ಹುಳು

**96.**

ಅಂಜಿಕೆಯ ತೊಟ್ಟು ಕಳಚಿಟ್ಟು

ಅವಳೊಳಗೆ ಒಂದಾದರೆ

ಬದುಕು ಹಸನಾಗುವುದೆಂಬ ಕಲ್ಪನೆ

ಭ್ರಮೆಯೂ ಇರಬಹುದು

## 97.

ಅವಳು

ತುಂಬಿದ ಕೊಡ.

ನನ್ನೆದುರು ಬರಿದಾದಾಗಲಷ್ಟೇ

ಒಡಲಾಳದ ಅಳತೆ

ದಕ್ಕುವುದು.

## 98.

ನೆನಪಿನ ಮಾರುಕಟ್ಟೆಯಲ್ಲಿ

ಒಲವು, ನಲಿವು, ನೋವು

ಬಿಕರಿಗಿವೆ...

ಕೊಂಡುಕೊಳ್ಳಲು

ಕಾಲವೆಂಬ ಕಾಸು

ಹೊಂದಿಸಬೇಕು.

## 99.

ಮನಸ್ಸಿನೊಂದಿಗೆ

ನಲಿವು

ಮುನಿಸಿಕೊಂಡ ಕ್ಷಣ

ನೆನಪಾಗುವ ಹೆಸರು

ಅವಳು

## 100.

ಅವಳ ಮಾತು

ಕಿವಿಗೆ ಬಂದಪ್ಪಳಿಸುವ

ಸದ್ದು ಮಾತ್ರವಲ್ಲ

## 101.

ಸಂಭ್ರಮದ

ಎದೆಯ ಮೇಲೆ

ಅಮರಿಕೊಂಡಿದ್ದ

ಹತಾಶೆಯ ಪೊರೆ

ಅವಳ ಒಲವಿನ ದಾಳಿಗೆ

ಈಡಾಗಿ ಕಳಚಿಕೊಳ್ಳುತ್ತಿದೆ

**102.**

ಹುಮ್ಮಸ್ಸು ಹುಟ್ಟಲು

ಜೀವಸೆಲೆ ಹೊತ್ತ ಬಸ್ಸು

ಬರ್‍ತ್ರೆಂದು

ಮನದ ನಿಲ್ದಾಣದಲ್ಲಿ

ಬಂದು ನಿಲ್ಲಲು

ಅವಳ ನೆನಪೊಂದು ಸಾಕು

## 103.

ನಿನ್ನ ನಗು

ನುಡಿಯುತ್ತಿದೆ

ಮುನಿಸಿನ

ಸಾವಿನ ಸಮಾಚಾರ!

## 104.

ದೌರ್ಬಲ್ಯಗಳ

ಉಗ್ರಾಣ ನಾನು.

ನಿವಾರಣಾ ತಾಣ

ನೀನು.

## 105.

ಸುಡುವ ನೀರವತೆಗೆ

ನಿನ್ನದೇ ಚಾಳಿ.

ಸ್ರವಿಸುವುದು

ವಿರಹವೆಂಬ ಬಿಸಿಗಾಳಿ.

## 106.

ಕದ್ದು ನೋಡುವುದು

ಖುದ್ದು ನೋಡುವುದು

ಇವೆರಡರಲ್ಲಿ

ನಿನಗ್ಯಾವುದಿಷ್ಟವೆಂದು

ಕೇಳುವುದು

ನನಗೆ ಇಷ್ಟವಾಗುವ ಕಷ್ಟ

## 107.

ನಿರೀಕ್ಷೆಯ

ನಶೆ ಏರಿಸಿಕೊಂಡು

ನಲಿಯುವ

ಮನದ ಚಾಳಿ

ನಿನ್ನದೇ ಬಳುವಳಿ

## 108.

ಮಾತು ಕಲಿಸಲು ಬಂದ

ನೀನು

ಮೌನವಾಗಬಾರದಿತ್ತು.

ಮಾತು ಕಲಿತ ನಾನು

ಮೌನ ತೊರೆಯಬಾರದಿತ್ತು.

## 109.

ದಿನದ ಕಡೆಯ ಎಚ್ಚರ

ಆಲಿಸುವ

ನೀರವತೆಯ ಇಂಚರ

ನಿನ್ನ ಸ್ವರದಷ್ಟೇ

ಮಧುರ

## 110.

ನನ್ನೊಳಗೆ

ಏನೂ ಇಲ್ಲ

ನೀ ನೆಟ್ಟ

ಕನಸುಗಳು ಸತ್ತರೆ

## 111.

ನೀನು

ಎಲ್ಲೋ ನಿಂತು

ನನ್ನ ನೆನಪು ಮುಡಿದಾಗ

ನಾನು ನಿರಾಳ.

ಇಲ್ಲೇ ಜೊತೆಯಲ್ಲೇ ಕುಂತು

ಮಾತು ತೊರೆದಾಗ

ಬದುಕು ಕರಾಳ.

## 112.

ನನ್ನ ಕಣ್ಣಿಗೆ

ಮತ್ತೇರಿದೆ

ಅವಳ ನಗುವು

ಮೆಲ್ಲಗೆ ಬಂದು

ಮುತ್ತಿಕ್ಕಿದೆ

## 113.

‘ಅವಳು ಮೋಸಗಾತಿ’

ಹಾಗೆಂದು ಜರಿಯುವುದು

ಅವನ ಅತಿಯಾದ ಮಿತಿ

## 114.

ಪುಳಕದ

ಉಸಿರಿನೊಳಗೆ

ನಿನ್ನ ಹೆಸರು

ಸದಾ ಹಸಿರು

## 115.

ನಿನ್ನ ತುಂಟ ನೋಟ

ಬೋಧಿಸಿತು

ಪ್ರೀತಿಯ

ಮೊದಲ ಪಾಠ

**116.**

ನಿನ್ನ ಕಣ್ಣು ತೆಗೆಯುವ

ತುಂಟ ತಕರಾರು

ನನ್ನ ಪಾಲಿಗೆ

ತಳಮಳದ ತವರೂರು

**117.**

ಮಾತು ಮುದ್ದಿಸುವ ಅವಳು

ಅಪರೂಪಕ್ಕೊಮ್ಮೆ ಮೌನವಾಗಿ

ಮಾತಾಡುವ ಬಗೆ

ಬೋಧಿಸಿದಳು

## 118.

ಅವನ

ಕೊಳಲ ದನಿ

ಅವಳ ಕಂಬನಿ

ಒರೆಸುತ್ತಿದೆ

119.

ಎಷ್ಟೋ ದಿನದ ನಂತರ

ಸುರಿದ

ಒಲವಿನ ಮಳೆ

ಮನದ ಮೇಲೆ ಕವಿದಿದ್ದ

ಜಡತ್ವದ ಕೊಳೆ

ತೊಳೆಯಿತು

## 120.

ಕತ್ತಲು ಹೊದ್ದ

ರಸ್ತೆ ನಾನು.

ಬರ್ರೆಂದು

ಬೈಕಿನಲ್ಲಿ ಬಂದ

ಬೆಳಕು ನೀನು.

## 121.

ಎಲ್ಲಾ ಮಾತುಗಳೂ

ಕೇವಲ ಮಾತು ನಿನಗೆ.

ನಿನ್ನವು ಮಾತ್ರ

ಮುತ್ತು ನನ್ನ ಪಾಲಿಗೆ.

## 122.

ಅವಳ

ಕಂಗೆಟ್ಟ ಕಂಗಳಲಿ

ನಲಿವಿನ ಚಹರೆ

ಅರಸುವ ಅವನು

ಆಶಾವಾದಿ

## 123.

ಅವಳು

ಮನದ ಗುಡಿಯಲ್ಲಿ ಕುಳಿತು

ಮತ್ತೆ ಹಾಡಿದಳು.

ಹಾಡು ಅರಿಯದ ನಾನು

ವಾಸ್ತವದ ಗೂಡು ಸೇರಿಕೊಂಡು

ಕನಸು ನುಂಗಿಕೊಂಡೆ.

## 124.

ರೆಕ್ಕೆ ಪುಕ್ಕ

ಕಳಚಿಕೊಂಡ

ಹಕ್ಕಿಯ ಮೈಬಣ್ಣ ಕಂಡು

ಪುಳಕಗೊಂಡವನು ನಾನು

**125.**

ಸುಮ್ಮನೆ ನಿಂತಿದ್ದ

ನೆನಪಿಗೆ

ಚಲನೆ ಕರುಣಿಸಿದ ಅವಳ ನಗೆಗೆ

ನಾಲ್ಕು ತದುಕುವ ಸಲುವಾಗಿ

ಮುಖ ಸಿಂಡರಿಸಿಕೊಂಡ ನನಗೆ

ನನ್ನದೇ ಮುಖಭಂಗದ ಮುಖ

ನೋಡುವ

ಸದಾವಕಾಶ ಒಲಿಯಿತು

**126.**

ಮೂಲೆಗೆಸೆದ

ಅವಳ ನೆನಪು

ಮಧ್ಯರಾತ್ರಿ

ಮಡಿಲು ಸೇರಿತು

**127.**

ನಾನು ಮೋಹಿಸುವ

ಮೌನಕ್ಕೆ

ಅವಳ ಮಾತಿನ ಮೇಲೊಂದಿಷ್ಟು

ಮೋಹ

**128.**

ಅವಳ ಗಮನಸೆಳೆಯಲು

ಹೊರಟ

ಆ ಕ್ಷಣದ ಆಸೆಗೆ

ವಾಸ್ತವ ಬಿಗಿಯುವ ಭಾಷಣ

ಅರ್ಥವಾಗದು

**129.**

ಮೌನ ಮಾತಿಗಿಳಿದಿತ್ತು

ಅವಳ ಕಣ್ಣೋಟದ

ರೂಪ ಧರಿಸಿತ್ತು

**130.**

ನಿನ್ನ ಅಚ್ಚೆಕೊಂಡಷ್ಟೂ
ಹತ್ತಿರಾಗುವ ಹುಚ್ಚುತನ
ಎಚ್ಚರಿಸುತ್ತದೆ
‘ಸ್ವಲ್ಪ ಜೋಪಾನ’!

**131.**

ಅವಳ ಕಣ್ಣಹನಿ
ಬರಿದಾಗಿರುವ
ಅವನ ಪ್ರೀತಿಯ ಒರತೆ
ತುಂಬುವ ಕನಸು ಕಟ್ಟುತ್ತಿದೆ

**132.**

ನೀತಿ ಹಿಸುಕದ

ಭೀತಿ ಹೊಸುಕದ

ಪ್ರೀತಿ ಪ್ರೀತಿಯಲ್ಲ;

ಪಜೀತಿ.

**133.**

ಮುಗಿಲೆತ್ತರಕ್ಕೆ ಬೆಳೆದು ನಿಂತ

ಅವಳ ಮಡಿಲಲ್ಲಿ

ಬೊಗಸೆಯಷ್ಟು ಬೆಳದಿಂಗಳು

ಹಾಗೆ ಇದೆ

## 134.

ಮನದ ಮನೆ ಸಿಂಗರಿಸಿದ

ಅವಳ ಮಾತಿನ ಅನುಪಸ್ಥಿತಿ

ಮೌನದ ಮಿತಿ ಬಣ್ಣಿಸುತ್ತಿದೆ

## 135.

ಹತ್ತಿರ ಸುಳಿಯದವಳು

ಭ್ರಮೆಯ ಗುಡಿಯ ದೇವತೆ

ಜೊತೆ ಬಂದವಳು

ಒಲುಮೆಯ ಬೆಳಕು ಬೀರಿ

ನಂದಿ ಹೋದ ನತದೃಷ್ಟ ಹಣತೆ

**136.**

ಇಳಿಯಬೇಕಿತ್ತು ನಾನು

ನನ್ನವಳ ಒಳಗೆ

ಜೀವ ದೇಹದೊಳಗೆ

ಇಳಿದಂತೆ

**137.**

ಎಂದೂ ಅನುಭವಿಸದ

ಸ್ವರ್ಗ ಸುಖದ

ಜಪದ ಮೂಲ

ಅವಳು

## 138.

ನನ್ನ

ಅಳುವ ಪರವಾನಗಿ

ಕಸಿದುಕೊಂಡು ಹೋದ

ಅವಳ ನಗೆಗೆ

ಕಣ್ಣೀರು

ಹಿಡಿಶಾಪ ಹಾಕುತ್ತಿದೆ

**139.**

ನನ್ನವೇ ಆದ

ತಿಕ್ಕಲು ಕನವರಿಕೆಗಳು

ಈಗ ನನಗೂ ಬೇಡವಾಗಿವೆ

ಅವಳಿಗೆ ನಾನು

ಬೇಡವಾದಂತೆ

**140.**

ಜಗದ ಪಾಲಿನ ಜಾಣ

ನಿನ್ನ ಎದುರು ಕೋಣನಾಗಿ

ತಲೆ ಬಾಗಿಸಿದ್ದು

ನಟನೆ ಅಲ್ಲವೆಂಬ ಸತ್ಯ

ನಿನಗೆ ಅರಿವಾಗಿದ್ದಿದ್ದರೆ

ದಡ್ಡತನದ ಮೂಲ

ತಲುಪಬಹುದಿತ್ತು

**141.**

ನೀ ಎದುರು ಸಿಕ್ಕಾಗ

ಸುಮ್ಮನೆ ನಕ್ಕಾಗ

ಏರಿದ ಎದೆಬಡಿತ

ಬೋಧಿಸಿತು

ಪ್ರೀತಿಯ ರೇಖಾಗಣಿತ

**142.**

ಅವಳ ಮುನಿಸಿಗೆ

ಸೋತ ಮನಸು

ಒಡಲೊಳಗೆ

ಲವಲವಿಕೆ ಸ್ರವಿಸುತ್ತಿದೆ

**143.**

ಅವಳ ಮಡಿಲಲ್ಲಿ

ಕೆಂಡದ ರಾಶಿ...

ಕಣ್ಣೀರು ಆವಿಯಾಗಿದೆ

## 144.

ಅವಳ ನೆನಪು

ಹೊರಹಾಕಲು

ನಿರಾಕರಿಸಿದ

ಮನಸಿನೊಂದಿಗೆ

ಮಾತು ಬಿಟ್ಟಿದ್ದೇನೆ

## 145.

ಅವನ ಬದುಕಿನ ಬಣ್ಣಗಳು

ಅವಳ ಕಣ್ಣಲ್ಲಿ

ರಾಡಿಯಾಗಿವೆ

## 146.

ಮೌನವಾಗಿ

ಒಳ ಬಂದಳು.

ಮಾತಿಗಾಗಿ

ಹೊರ ನಡೆದಳು.

**147.**

21 ತುಂಬಿದರೂ

ಯಾವ ಹುಡುಗಿಯ ಕಣ್ಣಿಗೂ

ವಿಶೇಷವಾಗಿ ಕಾಣದ

ನನ್ನ ಕುರಿತು

ನನ್ನದೇ ಕಣ್ಣಿಗೆ

ಅನುಕಂಪವಿದೆ

## 148.

ಒಬ್ಬನೆ ನಿಂತ ದಾರಿ ಬದಿಯಲ್ಲಿ

ಕೈ ಬೀಸಿ ಕರೆಯುತ್ತಿರುವ ಅವಳು...

ಹೆಪ್ಪುಗಟ್ಟಿದ ನೋವು

ಈಗೀಗ ಕರಗುವಂತೆ ನಟಿಸುತ್ತಿದೆ

## 149.

ರಾತ್ರಿ ಸುರಿದ ಮಂಜಿನ ಮಳೆಯಲ್ಲಿ

ನಡುಗುತ್ತ ನಾನೊಬ್ಬನೇ ನೆನೆದೆ

ಅವಳು ಬೆಚ್ಚಗೆ ಮಲಗಿದ್ದಳು...

ಹಸಿ ಕನಸುಗಳ ಮಡಿಲಲ್ಲಿ

**150.**

ದಿಕ್ಕು ತಪ್ಪುವುದೇ ಬದುಕೆಂದು

ನಂಬಿದವನಿಗೆ

ನಿನ್ನ ಪ್ರೀತಿಯೇ ದಿಕ್ಕು

**151.**

ಸಾವಿರ ಮುನಿಸುಗಳು ಸುಳಿದರೂ

ಸರಿಯದಿರಲಿ ಒಲವು

ಕರಗದಿರಲಿ ನಲಿವು

**152.**

ನಿನ್ನ

ಹುಸಿ ಮುನಿಸಿನೆದುರು

ಮಂಡಿಯೂರಿ ಕುಳಿತ

ನನ್ನ ಅಹಂ

ಮೂಳೆ ಮುರಿದುಕೊಂಡು

ಮೂಲೆ ಸೇರಿದೆ

**153.**

ಮನದಲ್ಲಿ ತೆರೆ ಕಾಣದ

ಕನಸಿನ ಚಿತ್ರದ ಹೆಸರು

ಅವಳ ಒಡಲು

**154.**

ನೀನೆಂದರೆ

ಮುನಿಸಿನ ಸಹವಾಸ

ಅಚ್ಚೆಕೊಂಡಷ್ಟೂ

ದೂರ ಸರಿಯುವ ಆಗಸ

**155.**

ಎದೆಯೊಳಗೆ

ಒಲವಿನ ಹೂ ಮುಡಿಸಿದ

ಹುಡುಗಿ

ದೂರ ನಿಂತು ಕಣ್ಣರಳಿಸಿದ್ದಾಳೆ.

ನನ್ನ ಕಣ್ಣಂಚು

ಒದ್ದೆಯಾಗಿದೆ.

## 156.

ಎದೆಯಲ್ಲಿ

ಅದುಮಿಟ್ಟುಕೊಂಡ ಪ್ರೀತಿಯ

ಹೇಗೆ ಹಾರಿ ಬಿಡಬೇಕೋ

ತಿಳಿದಿಲ್ಲ

**157.**

ನೀ ಎಷ್ಟು ಬೈದರೂ

ನನಗೆ ನೋವಿಲ್ಲ.

ಮಾತು ದಹಿಸಿ

ಮೌನ ಸ್ರವಿಸುವ

ನಿನ್ನ ಮುನಿಸು ಸಹಿಸಿಕೊಳ್ಳುವ

ಶಕ್ತಿ ನನಗಿಲ್ಲ.

**158.**

ನಿನ್ನ ನಲಿವಿನ ನೆರಳಲ್ಲಿ

ಮಲಗಿದ್ದ ನನ್ನ ನೋವುಗಳು

ಸಮಾಧಿ ಸೇರಿದ್ದೇ ತಿಳಿಯಲಿಲ್ಲ

**159.**

ನನಗೆ

ಬಿಕ್ಕಿ ಬಿಕ್ಕಿ ಅಳಬೇಕೆನಿಸುತ್ತಿದೆ...

ಅವಳ ನಲಿವಿಗೆ

ನೀರುಣಿಸುವ ಸಲುವಾಗಿ

## 160.

ರೆಕ್ಕೆ ಮುರಿದುಕೊಂಡ

ನನ್ನ ಮಾತು

ನಿನ್ನ ಬುಡದಲಿ...

ತುಸು ದನಿ ಕೊಡು

ಭಾವುಕತೆ ದಣಿಯಲು

## 161.

ಬಿಕ್ಕಳಿಸುತ್ತ ಬಿದ್ದಿದ್ದ ಕನಸನ್ನು

ಅವಳ ಮಡಿಲಲ್ಲಿಟ್ಟು ಹೊರಟವನ

ಎದೆಯ ಮೇಲೆ ಸಾವಿನ ಕರಿನೆರಳು

## ಸೂಚನೆ

'ಇತ್ಯಾದಿ ಏನಿಲ್ಲ... ಪ್ರೀತಿಯಷ್ಟೆ!' ಇ-ಪುಸ್ತಕವಾಗಿ ಮಾತ್ರ ದೊರೆಯಲಿದೆ. ಇದರ ಮುದ್ರಿತ ಪ್ರತಿಗಳು ಲಭ್ಯವಿರುವುದಿಲ್ಲ. ಪುಸ್ತಕ ನಿಮಗೆ ಮೆಚ್ಚುಗೆಯಾದಲ್ಲಿ ಅಥವಾ ಇದು ಓದಲು ಅರ್ಹವೆನಿಸಿದಲ್ಲಿ ಪುಸ್ತಕದ ಪಿಡಿಎಫ್ ಪ್ರತಿಯನ್ನು ನೀವು ಯಾರೊಂದಿಗಾದರೂ ಹಂಚಿಕೊಳ್ಳಬಹುದು.

ನಾವು ಹೊರತರುವ ಇ-ಪುಸ್ತಕಗಳನ್ನು ಉಚಿತವಾಗಿ ಓದಲು ಬಯಸದೆ ಹಣ ಪಾವತಿಸಲು ಇಚ್ಛಿಸುವವರು ಮಾತ್ರ 50 ರೂ. ಪಾವತಿಸಲು ಈ ಕೆಳಗಿನ ಲಿಂಕ್ ಬಳಸಬಹುದು...

https://imjo.in/ukXsXQ

## ಪ್ರಜೋದಯ ಪ್ರಕಾಶನದ ಪುಸ್ತಕಗಳು

**ಮೊದಲ ತೊದಲು (ಲೇಖನಗಳು)** ಎಚ್ ಕೆ ಶರತ್ ಬೆಲೆ: ₹ 80

**ಕರಗದ ನಗು (ಕತೆಗಳು)** ಕಾವೇರಿ ಎಸ್.ಎಸ್. ಬೆಲೆ: ₹ 65

**ಸೋಲು ಗೆದ್ದವನದ್ದು! (ಕಾದಂಬರಿ)** ಮಂಜು ಬನವಾಸೆ ಬೆಲೆ: ₹ 150

**ಬೆಳಕಿನ ಬೇಲಿ (ನ್ಯಾನೋ ಕತೆಗಳು)** ಎಚ್ ಕೆ ಶರತ್ ಬೆಲೆ: ₹ 60

**ಒಡಲ ಖಾಲಿ ಪುಟ (ಲೇಖನಗಳು)** ಕಾವೇರಿ ಎಸ್.ಎಸ್. ಬೆಲೆ: ₹ 120

* **ಗೋಡೆಗಳ ನಡುವೆ... (ಲೇಖನಗಳು)** ಎಚ್ ಕೆ ಶರತ್ ಬೆಲೆ: ₹ 0

* **ಕುಶಲೋಪರಿ (ಲೇಖನಗಳು)** ಎಚ್ ಕೆ ಶರತ್ ಬೆಲೆ: ₹ 0

* **ಇತ್ಯಾದಿ ಏನಿಲ್ಲ... ಪ್ರೀತಿಯಷ್ಟೆ! (ಕವಿತೆ ಕಳಚಿದ ಸಾಲುಗಳು)** ಶರತ್ ಎಚ್.ಕೆ. ಬೆಲೆ: ₹ 0

* ಇ-ಪುಸ್ತಕ: ಮುದ್ರಿತ ಪ್ರತಿ ಲಭ್ಯವಿರುವುದಿಲ್ಲ

## ಆನ್ ಲೈನ್ ಅಂಗಡಿ

www.instamojo.com/prajodaya

/prajodayaprakashana /prajodaya /prajodaya